AUDIO CD

# ಬಾಹುಬಲಿ ದರ್ಶನ್

ಪ್ರೊ. ಪ್ರತಾಪ್‌ಕುಮಾರ್ ಟೋಲಿಯಾ
प्रा. प्रतापकुमार ज. टोलिया
*Prof. Pratapkumar J. Toliya*

# बाहुबली दर्शन
# BAHUBALI DARSHAN

VCD

ಬಾಹುಬಲಿ ದರ್ಶನ್

ಪ್ರೊ. ಪ್ರತಾಪ್‌ಕುಮಾರ್ ಟೋಲಿಯಾ
प्रा. प्रतापकुमार ज. टोलिया
Prof. Pratapkumar J. Toliya

बाहुबली दर्शन
BAHUBALI DARSHAN

Some Editings are done in this Script which are in enclosed Hindi script and also in the VCD

# ಬಾಹುಬಲಿ ದರ್ಶನ

BAHUBALI

## ಸಾಮಾಜಿಕ ರಾಜನೈತಿಕ ಸಮಸ್ಯೆಗಳು - ಅಹಿಂಸಕ ಸಮಾಧಾನ

## ಸಂಯಮ ಮತ್ತು ಅಪೂರ್ವ ಅನುಷ್ಟಾನ

ಪೀಠಿಕೆ ಸೂತ್ರದಾರ : ಅನಾದಿ ಅನಂತ ಕಾಲಧಾರೆಯಲ್ಲಿ, ಜೈನದರ್ಶನವು ಮುಂದುವರೆಯುತಿರುವ, ಈ ಕಾಲವನ್ನು , ಅವಸರ್ಪಿಣಿ ಕಾಲವೆಂದು ಹೇಳುತ್ತದೆ. ಈ ಕಾಲದ ಪ್ರಥಮ ರಾಜ, ಪ್ರಥಮ ಸಂಸ್ಕೃತಿ ಪುರಸ್ಕರ್ತ, ನಾಟ್ಯ ಕಲಾದಿ ಪ್ರದಾತ, ಅಸಿಮಸಿ ಕೃಷಿಯ, ಬ್ರಾಹ್ಮೀ ಲಿಪಿಯ ಪ್ರಥಮ ಪ್ರಸ್ತುತಕರ್ತ, ಪ್ರಥಮ ನಿಷ್ಪಂಗ್ರಹಿ, ಶ್ರಮಣ ಧರ್ಮತೀರ್ಥದ ಪ್ರಥಮ ಪ್ರವರ್ತಕರಾಗಿದ್ದರು. ಋಷಭದೇವ ಭಗವಾನರು.

ಋಷಭದೇವರಿಂದ, ಪ್ರವರ್ಧಿತವಾದ, ಧರ್ಮತೀರ್ಥ ಪರಂಪರೆ, ವಿಶ್ವದಲ್ಲೆಲ್ಲಾ ಹರಡಿ, ಅವರ ನಂತರ ಅಜಿತನಾಥ, ಸಂಭವನಾಥ, ಶಾಂತಿನಾಥ, ಪಾರ್ಶ್ವನಾಥರಿಂದ ಮುಂದುವರೆದು, ಭಗವಾನ್ ಮಹಾವೀರರವರೆಗೆ ಹರಿದು ಬಂದಿತು ಇಂತಹ ಮಹಾನ್ ಮತ್ತು ಸುದೀರ್ಘ ಕಾಲೀನ, ತೀರ್ಥಪರಂಪರೆಯ, ಪರಮೋಪಕಾರಿ ಋಷಭದೇವ ಭಗವಾನರ 100 ಪುತ್ರರಲ್ಲಿ ಭರತ ಮತ್ತು ಬಾಹುಬಲಿ ಪ್ರಧಾನರು. ಚಕ್ರವರ್ತಿ ಭರತನಿಂದಲೇ ಭಾರತಕ್ಕೂ ಭಾರತ ವರ್ಷವೆಂಬ ಹೆಸರು ಬಂದಿದ್ದು. (ಮತ್ತ ಬಾಹುಬಲಿ?)

ಸ್ತ್ರೀ : ಬಾಹುಬಲಿ ಪ್ರಥಮ ತೀರ್ಥಂಕರರ ಪುತ್ರರು ಮತ್ತು ಚಕ್ರವರ್ತಿ ಭರತರ ಸಹೋದರರಾಗಿದ್ದರು. ಈ (ಅವಸರ್ಪಿಣಿ ಕಾಲದಲ್ಲಿ, ಸ್ವಪುರುಷಾರ್ಥದಿಂದ, ಅಹಂಕಾರವನ್ನು ಅಳಿಸಿ, ಅಮೋಘ ಸಾಧನೆಯಿಂದ, ಸರ್ವೋತ್ತಮ, ಪರಿಪೂರ್ಣ, ಆತ್ಮಜ್ಞಾನವನ್ನು ಪಡೆದ ಪ್ರಥಮ ಆತ್ಮಜ್ಞಾನಿಗಳಾಗಿದ್ದರು.)

missing from here refer Hindi mm 3.

ಪುರುಷ : ಭರತ ಬಾಹುಬಲಿಯರ ಪರಸ್ಪರ ಯುದ್ಧ ವಿಷಯ ಮತ್ತು ಅವರ ಅದ್ಭುತ ಕಥೆಯನ್ನು ಸಂಸ್ಕೃತ, ಪ್ರಾಕೃತ, ಕನ್ನಡ ಮತ್ತು ಅನೇಕ ಭಾಷೆಗಳಲ್ಲಿ, ಭರತೇಶ ವೈಭವ, ಭರತ ಬಾಹುಬಲಿ ಶಾಸ್ತ್ರೋ ಮುಂತಾದ ಹೆಸರಿನಲ್ಲಿ ಅನೇಕ ಸಾಹಿತ್ಯ ಕೃತಿಗಳು ಬರೆಯಲ್ಪಟ್ಟಿವೆ. ಈ ಕೃತಿಗಳ ನಂತರ, ಋಷಭದೇವ, ಭರತ ಮತ್ತು ಬಾಹುಬಲಿಯರ ಕಾಲದ ನಂತರವೂ, ಕೋಟಿ ವರ್ಷಗಳು ಕಳೆದರೂ, ಒಂದು ಅದ್ಭುತ, ಅಭೂತಪೂರ್ವ, ಅನುಪಮ ದಿವ್ಯ ಭವ್ಯ ಶಿಲಾಮೂರ್ತಿ, ಶ್ರವಣಬೆಳಗೊಳದಲ್ಲಿದೆ. ಬಾಹುಬಲಿಯ ಚಿರಂತನ ಮಹಿಮೆಯನ್ನು ಹಾಡುತ್ತ, ಅವರ ಪವಿತ್ರ ಸ್ಮೃತಿಯನ್ನು ಸಮಾಜಕ್ಕೂ ಕೊಡುತ್ತಾ ಈ ಮೂರ್ತಿ ಅಚಲ ಮತ್ತು ಅಮರವಾಗಿದೆ.

ಸ್ತ್ರೀ : ಈ ಶಿಲಾ ಪ್ರತಿಮೆ, ಉತ್ತುಂಗ ಹಿಮಾಲಯದಷ್ಟು ಉನ್ನತ, ಆಳವಾದ ಸಾಗರದಷ್ಟು ಗಂಭೀರ, ಶಾಂತಿಧಾಯಿನಿ, ತನ್ನ ದಿವ್ಯ ತೇಜೋಪೂರ್ಣವದನಾರವಿಂದದಿಂದ, ಯುಗಯುಗಗಳವರೆಗೆ ಪ್ರೇರಣೆ ಕೊಡುತ್ತ, ಅಹಂಕಾರದ ನಾಶವನ್ನು ಮತ್ತು ಆಧ್ಯಾತ್ಮದ ಆದರ್ಶವನ್ನು ಪ್ರತಿಬಿಂಬಿಸುತ್ತದೆ.

ಪುರುಷ : ಮಾನವ ಸಂಸ್ಕೃತಿಯ ಆದಿಪ್ರಣೇತಾ, ಭಗವಾನ್ ಋಷಭ ದೇವರು, ತಮ್ಮ 72 ಪುರುಷ ಕಲೆಗಳಿಂದ, ಶತ್ರುಗಳಿಂದ ಸ್ವರಕ್ಷಣೆ ಮತ್ತು ಶಿಸ್ತು ಪಾಲನೆಗೆ ಯುದ್ಧ ವಿದ್ಯೆಯನ್ನು ಕಲಿಸಿದರು. ಆದರೆ?

ಸ್ತ್ರೀ : ಆದರೆ ಏನು?

ಪುರುಷ : ಆದರೆ ಮಾನವ ಅದರ ಸದುಪಯೋಗದ ಬದಲಾಗಿ ಅದರ ದುರುಪಯೋಗವನ್ನೆ ಮಾಡಿದ. ಈ ದುರುಪಯೋಗವನ್ನು

ತಡೆಯಲು, ಅಹಿಂಸಾವಾದಿ ಋಷಭದೇವರು, ಶಿಸ್ತನ್ನು ಪ್ರಚುರಗೊಳಿಸಲಿ, ಪುತ್ರರಾದ ಭರತಬಾಹುಬಲಿಯನ್ನು ಶಸ್ತ್ರಾಸ್ತ್ರರಹಿತವಾದ, ಅಹಿಂಸಾತ್ಮಕ ಯುದ್ಧಕ್ಕೆ ಮೊದಲಿಗೆ ಸೂತ್ರಪಾತ ಮಾಡಿದರು.

ಸ್ತ್ರೀ : ಅದು ಹೇಗೆ?

ಪುರುಷ : ರಾಜ್ಯ ಶಾಸನವನ್ನು ಭರತ, ಬಾಹುಬಲಿ ಮತ್ತು 98 ಸಹೋದರರಿಗೆ ಒಪ್ಪಿಸಿ, ತಂದೆ ಋಷಭದೇವರು ಆತ್ಮಸಾಧನೆಗಾಗಿ, ಸನ್ಯಾಸವನ್ನು ಸ್ವೀಕರಿಸಿ ವನಕ್ಕೆ ತೆರಳಿದ್ದರು. ಅವರ ನಂತರ ಅವರ ಪುತ್ರರೂ ಸಹ, ತಮ್ಮ ತಮ್ಮ ಮಕ್ಕಳಿಗೆ, ರಾಜ್ಯವನ್ನು ಒಪ್ಪಿಸಿ, ತಂದೆ ಭಗವಾನ್ ಋಷಭದೇವರಿಂದಲೇ ದೀಕ್ಷಿತರಾಗಿದ್ದರು.

ಸೂತ್ರಧಾರಿಣಿ : ಆದರೆ ಪೂರ್ವ ಸಂಸ್ಕಾರಿ ; ಸೌಮ್ಯ ದೃಷ್ಟಿಯುಳ್ಳ, ಋಷಿಭಧರ್ಮಾನು ಶಾಸನದ ಉತ್ತರಾಧಿಕಾರಿ, ಜ್ಯೇಷ್ಠ ಪುತ್ರ ಮಹಾರಾಜ ಭರತರಿಗೆ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸುವುದು ಅವಶ್ಯಕವಾಗಿತ್ತು ಮತ್ತು ಪೃಥ್ವಿಯ ಮೇಲೆ ಶಿಸ್ತು ಪಾಲನೆಯನ್ನು ಮಾಡಬೇಕಾಗಿತ್ತು.

ಸೂತ್ರಧಾರ : ಸಾರ್ವಭಾಮತ್ವವನ್ನು ಸ್ಥಾಪಿಸುವ, ದಿಗ್ವಜಯದ ಅಭಿಯಾನದಲ್ಲಿ, ಭರತರ ಸ್ವಂತ, ಆಸೆಆಕಾಂಕ್ಷೆಗಳಿಗೆ ಸ್ಥಾನವಿರಲಿಲ್ಲ, ಅದು ಭಾಗ್ಯಾಧಿನವಾಗಿದ್ದು, ಪೂರ್ಣ ಮಾಡಬೇಕಾಗಿತ್ತು.

ಸೂತ್ರಧಾರಿಣಿ : ಆದ್ದರಿಂದ ಈ ದಿಗ್ವಿಜಯದ ಅಭಿಯಾನ, ಭರತರ ರಾಜ್ಯ ತೃಷೆಯಾಗದೆ, ವಿಧಿಬರಹದ ಸಹಜ ಪರಿಣಾಮವಾಗಿತ್ತು.

ಸೂತ್ರಧಾರ : ಇದೇ ಸಮಯದಲ್ಲಿ ವಿಧಿಗನುಸಾರವಾಗಿ ಮೂರು ಶುಭ ಸಮಾಚಾರಗಳೂ, ಮೂರು ದೊಡ್ಡವಿಶಿಷ್ಟಘಟನೆಗಳಾದುವು.

ಸೂತ್ರಧಾರಿಣಿ : ಏನು?

ಸೂತ್ರಧಾರ : ರಾಜ ಮಹಲಿನ ಸಭೆಯಲ್ಲಿ, ಕುಳಿತಿದ್ದಾಗ ಭಾರತರಿಗೆ ಮೂರು ಅತಿ ಶುಭ ಸಮಾಚಾರಗಳು ಬಂದುವು. ಸರ್ವಋತುಗಳ ಫಲ ಪುಷ್ಪದೊಂದಿಗೆ ಮೂರು ಮಂಗಳ ವಾರ್ತೆಯನ್ನು ವನಮಾಲಿ ತಂದನು.

ಸೂತ್ರಧಾರಿಣಿ : ಏನು ? ಏನು ?

ಸೂತ್ರಧಾರ : ಭಗವಾನ್ ಋಷಭದೇವರ ತಪಸ್ಸು ಸಿದ್ಧಿಯಾದಿದರಿಂದ ಸಾರುತು ಪ್ರಕೃತಿಯು ಅನುಕೂಲವಾಗಿದ್ದು ಶೋಭಿಸುತ್ತಿದೆ. ದೇವಿ ದೇವತೆಗಳ ಉತ್ಸವವನ್ನು ಮಾಡಿ ಸಂಭ್ರಮಿಸುತ್ತಿದ್ದಾರೆ, ಏಕೆಂದರೆ ಋಷಭದೇವರಿಗೆ ಜ್ಞಾನರತ್ನದ ಪ್ರಾಪ್ತಿಯಾಗಿದೆ.

ಸೂತ್ರಧಾರಿಣಿ : ಜ್ಞಾನರತ್ನವೆ? ಪ್ರಪಂಚದ ಸರ್ವೋತ್ತಮವಾದ ಜ್ಞಾನ ಜ್ಞಾನ. ಅದ್ಭುತ! ಅನುಪಮ! ಮತ್ತೆ ಎರಡನೆಯ ವಾರ್ತೆ ?

ಸೂತ್ರಧಾರ : ಈ ಶುಭ ವಾರ್ತೆ ಸಿಕ್ಕಿದ ಕೂಡಲೇ ಭರತ ಮಹಾರಾಜರು ಅತಿಯಾದ ಹರ್ಷೋಲ್ಲಾಸದಿಂದ ಏಳು ಹೆಜ್ಜೆ ನಡೆದು ತ್ರಿಲೋಕತ್ರಾತರು ಸರ್ವಜ್ಞರು ಆದ ಅರಿಹಂತ ಪರಮಾತ್ಮ ಪಿತರ ಪ್ರಥಮ ವಂದನೆಯನ್ನು ಮಾಡುತ್ತಾರೆ. ಅದೇ ಸಮಯಕ್ಕೆ ಆಯುಧ ಶಾಲೆಯ ರಕ್ಷಕ ಓಡೋಡಿ ಬಂದು, ನವರತ್ನಖಚಿತ ಮಹಾಮಹಿಮೆಯ ಚಕ್ರರತ್ನವು ಬಂದಿದೆ ಎಂದು ಹೇಳುತ್ತಾನೆ. ಇದರಿಂದ ಅವರ ಹರ್ಷ ದ್ವಿಗುಣಗೊಳ್ಳುತ್ತದೆ. ಅಷ್ಟರಲ್ಲೇ ಅಂತಃಪುರದ ಅವರದೇ ಧೂತನು. ಪುತ್ರರತ್ನಪ್ರಾಪ್ತಿಯ ಮೂರನೆಯ

ಸೂತ್ರಧಾರಿಣಿ : ಮಹಾರಾಜ ಭರತರು ಎಷ್ಟೊಂದು ಪುಣ್ಯವಂತರು ?

ಸೂತ್ರಧಾರ : ಸ್ವಲ್ಪ ಸಮಯದಲ್ಲೇ ಭಾಗ್ಯವಂತರು ಭರತರು ಚಕ್ರವರ್ತಿಯಾದರು. ಪೃಥ್ವಿಯ ಆರು ಖಂಡದ ಸಮಸ್ತರಾಜರು. ಆದರೆ

ಆಧಿಪತ್ಯವನ್ನು ಒಪ್ಪಿಕೊಂಡಾಗ ಅವರು ಚಕ್ರವರ್ತಿಯಾಗಬಲ್ಲರು. ಮತ್ತೆ ಅವರ ಚಕ್ರವರ್ತಿ ಘೋಷಣೆಯ ದಿಗ್ವಿಜಯದ ಅಭಿಯಾನ ಪ್ರಾರಂಭವಾಯಿತು. ಚಕ್ರರತ್ನ ಅವರಿಗೆ ಪೂರ್ವ ಪುಣ್ಯದ ಸುಕೃತದಿಂದ ಪ್ರಾಪ್ತವಾಗಿದೆ. ಎಲ್ಲಾ ರಾಜರು ಅವಿರೋಧದಿಂದಲೇ ಚಕ್ರವರ್ತಿತ್ವವನ್ನು ಒಪ್ಪಿಕೊಳ್ಳತೊಡಗಿದರು.

ಸೂತ್ರಧಾರಿಣಿ : ಎಲ್ಲಾ ರಾಜರು?

ಸೂತ್ರಧಾರ : ಹೌದು. ಪೃಥ್ವಿಯ ಆರು ಖಂಡದ ಸಮಸ್ತ ರಾಜರು. ಆರೂ ಖಂಡದ ರಾಜರಲ್ಲಿ ಆಧಿಪತ್ಯವನ್ನು ಸಿದ್ಧಗೊಳಿಸಿದ ನಂತರ, ಚಕ್ರ ಅಯೋಧ್ಯೆಗೆ ಮರಳಿತು. ಆದರೆ ಒಂದು ಬಹು ದೊಡ್ಡ ಘಟನೆ ನಡೆದು ಹೋಯಿತು.

ಸೂತ್ರಧಾರಿಣಿ : ಯಾವ ದೊಡ್ಡ ಘಟನೆ?

ಸೂತ್ರಧಾರ : ದಿಗ್ವಿಜಯ ಮಾಡಿ ಆಯುಧ ಶಾಲೆಗೆ ಮರಳಿ ಬರಬೇಕಾಗಿದ್ದ ಚಕ್ರ ಹೊರಗುಳಿಯಿತು. ಚಕ್ರದಿಂದ ಹೊಸ ಸಮಸ್ಯೆಯು ಎದುರಾಯಿತು. ರಾಜ ಪ್ರಜೆಗಳು ಚಿಂತಿತರಾದರು.

ಸೂತ್ರಧಾರಿಣಿ : ಏನು ಕಾರಣವಾಯಿತು?

ಸೂತ್ರಧಾರ : ಮಹಾರಾಜ ಭರತರಿಗೆ ತಮ್ಮ ಜ್ಞಾನದಿಂದ ಕಾರಣ ತಿಳಿದು ಬಂದಿತು. ಯಾವಾಗಲೂ ಅಗತ್ಯವೆಂದು ಗೌರವಿಸುತ್ತಿದ್ದ ನಮಸ್ಕರಿಸುತ್ತಿದ್ದ ಸಹೋದರ ಬಾಹುಬಲಿ, ಸ್ವಾಭಿಮಾನದಿಂದ, ಚಕ್ರದೆದಿರು ತಲೆತಗ್ಗಿಸಿರಲಿಲ್ಲ.

ಸೂತ್ರಧಾರಿಣಿ : ಆವರೆ ಅನ್ಯ ಬಂಧು ಬಾಂಧವರು ತಲೆತಗ್ಗಿಸಿರಲಿಲ್ಲ.

ಸೂತ್ರಧಾರ : ಏಕೆಂದರೆ ಅವರು ಆದರಣೀಯ ಅಗ್ರಜರೊಂದಿಗೆ ಜಗಳವಾಡು ಇಷ್ಟಪಡುತ್ತಿರಲಿಲ್ಲ. ಇದೇ ಕಾರಣದಿಂದಾಗಿ, ಅವರೆಲ್ಲರು ತಮ್ಮ ಪುತ್ರರಿಗೆ ರಾಜ್ಯವನ್ನು ಒಪ್ಪಿಸಿ ಭರತರ ಆಧಿಪತ್ಯವನ್ನು ಸ್ವೀಕರಿಸಲು ನಿರ್ದೇಶಿಸಿ ದೀಕ್ಷಾರ್ಥಿಗಳಾಗಿ ಭಗವಾನ್ ಋಷಭ ದೇವರಲ್ಲಿಗೆ ಹೊರಟುಹೋಗಿದ್ದರು. ಆದರೆ ಬಾಹುಬಲಿಯ ವಿಚಾರ ಬೇರೆಯದೇ ಆಗಿತ್ತು.

ಸೂತ್ರಧಾರಿಣಿ : ಅವರು ಪೂರ್ವ ಸ್ಕುನಾಂಗಲೂ, ಸಂಯಮಕ ದೃಷ್ಟಿಯವರು, ಸ್ವತಂತ್ರ ಪ್ರೇಮಿಯೂ, ಅತಿ ಬಲಶಾಲಿಯೂ ಮತ್ತು ಸ್ವಾಭಿಮಾನಿಯ ಜತೆಗೆ ಅಂತರಂಗದಲ್ಲಿ ಅಹಿಂಸಾವಾದಿಯಾಗಿದ್ದರು.

ಆದ್ದರಿಂದ ಅವರು ಹೊರಗೂ ಶಾಂತಿಯನ್ನೇ ಯಥಾವತ್ ಇಷ್ಟ ಪಡುತ್ತಿದ್ದರು. ಭರತರ ಪ್ರತಿ ಆದರ ಗೌರವಗಳನ್ನಿಟ್ಟುಕೊಂಡು ಬಾಹುಬಲಿ ನಾನು ರಕ್ತಪಾತವನ್ನು ಮತ್ತು ಅಗ್ರಜನ ಅವಮಾನವನ್ನು ನೋಡಲಾರೆ.

ಸೂತ್ರಧಾರಿಣಿ : ಆದರೆ ಅವರ ಈ ಅಹಿಂಸೆ ಹೇಡಿಯದ್ದಾಗದೆ, ಓರ್ವ ಅತಿ ಶಕ್ತಿವಂತ ಬಲಶಾಲಿಯ ಅಹಿಂಸೆಯಾಗಿತ್ತು. ಆಹಿಂಸೆಯ ಮಹಿಮೆಯನ್ನು ತಿಳಿದಿದ್ದರಿಂದ ಇಬ್ಬರೂ ಬಂಧುಗಳಲ್ಲಿ ಅಹಿಂಸೆಯ ಭಾವವಿತ್ತು, ಹೇಡಿತನವಿರಲಿಲ್ಲ.

ಸೂತ್ರಧಾರ : ಬಾಹುಬಲಿಗೆ ವಿವೇಕ ಮತ್ತು ವಸ್ತು ಸ್ವಭಾವವನ್ನು ತಿಳಿಯುವ ಕ್ಷಮತೆಯಿಂದಲೇ ಈ ಅಹಿಂಸೆಯ ಶಕ್ತಿ ಒಲಿದು ಬಂದಿದೆ. ಇದೇ ಕಾರಣದಿಂದಾಗಿ, ಅವರು ಅದ್ಭುತವಾದ ಮಾತನ್ನು ಹೇಳುತ್ತಾರೆ.

Classical Dance

ಸೂತ್ರಧಾರಿಣಿ : ಇದು ಅವರ ಸ್ವಾಭಿಮಾನವನ್ನು ಎಚ್ಚರಿಸುವ, ಅವರ ಸ್ವಾತಂತ್ರ ಮತ್ತು ಶಕ್ತಿಗೆ ಸವಾಲೆಸೆಯುವ, ಅವರ ಹೃದಯವನ್ನು ಗಾಯಗೊಳಿಸುವ ಪ್ರಸಂಗವಾಗಿದೆ, ತಮ್ಮನ್ನು ಸಮರ್ಪಿಸಿಕೊಳ್ಳಲು ಮಹಾರಾಜ ಭರತರಿಂದ ಆದೇಶವನ್ನು ತಂದಿರುವ ದಕ್ಷಿಣಾಂಕನೊಂದಿಗೆ ಸಂಭಾಷಿಸುತ್ತಾ ಹೀಗೆ ಹೇಳುತ್ತಾರೆ.

ಬಾಹುಬಲಿ : ದಕ್ಷಿಣಾಂಕ, ನನ್ನ ಹತ್ತಿರ ಅಗಾಧವಾದ ಬಾಹುಬಲವಿದ್ದರೂ, ರಾಜ್ಯದಾಸೆಗಾಗಿ ನಿರರ್ಥಕ ನರಸಂಹಾರ ಮಾಡಿ ವಿಶ್ವವಿನಾಶವನ್ನು ನಾನು ಇಷ್ಟಪಡುವುದಿಲ್ಲ.

ದಕ್ಷಿಣಾಂಕ : ಆದರೆ ಮಹಾರಾಜ, ಸಮರವಿಲ್ಲದೆ ಭರತ ಮಹಾರಾಜರ ದಿಗ್ವಿಜಯ ಹೇಗೆ ಸಂಭವವಾದೀತು?

ಬಾಹುಬಲಿ : ಹಿಂಸಕ ಯುದ್ಧಶಕ್ತಿಯ ಆಧಾರದ ಮೇಲೆ ಎಲ್ಲರೂ ದಿಗ್ವಿಜಯವನ್ನು ಮಾಡಬಲ್ಲರು. ಯುದ್ಧವಿಲ್ಲದೆ ವಿಶ್ವಹೃದಯದ ಜಯ

ಸೂತ್ರಧಾರಿಣಿ : ಆದರೆ ಅಂತ್ಯದಲ್ಲಿ ಅಗ್ರಜ ಭರತರು ಸಮಾಧಾನಕ್ಕೆ ಬದಲಾಗಿ, ಬಾಹುಬಲಿಗೆ ತನ್ನ ಸಾರ್ವಭೌಮತ್ವವನ್ನು ಸಾಧಿಸ ಹೊರಟಿದ್ದರಿಂದ, ಬಾಹುಬಲಿಗೆ ಯುದ್ಧವನ್ನೆ ಸ್ವೀಕರಿಸುವಂತಾಯಿತು.

ಸೂತ್ರಧಾರ : ಯುದ್ಧ! ಪರಸ್ಪರ ಇಷ್ಟಪಡುವ ಇಬ್ಬರು ಬಂಧುಗಳ ಮಧ್ಯೆ ಯುದ್ಧ! ಘೋರ ವಿನಾಶಕಾರಿ ಯುದ್ಧ!

ಸೂತ್ರಧಾರಿಣಿ : ಸಮರ ಸಾರಿ ಆಯೋಧ್ಯೆಯ ಸೇನೆ ಪೋದನಪುರದ ಕಡೆಗೆ ಹೊರಟಿತು.

ಸೂತ್ರಧಾರ : ತಲುಪುತ್ತಿದ್ದಂತೆಯೇ ಎರಡೂ ಬಂಧು ರಾಜರ ಸೈನ್ಯಗಳೂ ರಣರಂಗದಲ್ಲಿ ಮುಖಾಮುಖಿಯಾದುವು.

ಸೂತ್ರಧಾರಿಣಿ : ಆಗ ಬಹಳ ಭೀಷಣ ಯುದ್ಧವಾಗಿರಬಹುದಲ್ಲವಾ?

ಸೂತ್ರಧಾರ : ಆಗುವುದರಲ್ಲಿತ್ತು. ಅಷ್ಟರಲ್ಲಿ ಮಹಾಮಾತ್ಯರಿಗೆ, ಪುತ್ರಪ್ರೇಮಿಗಳು ಮತ್ತು ದೂರದರ್ಶಿಗಳೂ ಆದ, ಯಶಸ್ವತಿ ಮತ್ತು ಸುನಂದ ಮಾತೆಯರಿಂದ, ಈ ಸಮಸ್ಯೆಗೆ ಶಾಂತಿ ಪೂರ್ಣವಾದ ಸಮಾಧಾನವನ್ನು ಹುಡುಕಲು, ಆದೇಶವೊಂದು ಬಂದಿತು.

ಸೂತ್ರಧಾರಿ : ಪರಿಣಾಮವಾಗಿ ಅಯೋಧ್ಯೆ ಮತ್ತು ಪೋದನಪುರದ ಮಹಾಮಾತ್ಯರು ಭವಿಷ್ಯದ ಮೇಲೆ ದೃಷ್ಟಿಯಿಟ್ಟು, ಇಬ್ಬರೂ ಬಂಧುಗಳೂ ನಿಶಸ್ತ್ರ ಅಹಿಂಸರ, ದ್ವಂದ್ವಯುದ್ಧವನ್ನು ಮಾಡಬೇಕೆಂದು, ವಿವೇಕದ ಕರೆ ನೀಡುತ್ತಾ ಪ್ರಸ್ತುತ ಸಮರವನ್ನು ನಿಲ್ಲಿಸಲು ಆದೇಶಿಸಿದರು.

ಪ್ರಥಮಮಹಾಮಾತ್ಯ : ನಿಲ್ಲಿರಿ! ನಿಲ್ಲಿರಿ! ಅಹಿಂಸೆಗೆ ಜಯವಾಗಲಿ! ಋಷಭಶಾಸನದ ಜಯವಾಗಲಿ!

ದ್ವಿತೀಯ ಮ. ಮಾ. : ಮಹಾರಾಜ್ – ತಾವಿಬ್ಬರೂ ಋಷಭ ಸಂತಾನರು ಪ್ರಜೆಗಳ ಪಾಲಕರು, ಪೋಷಕರು ಮತ್ತು ಶಕ್ತಿವಂತರು.

ಪ್ರಥಮ ಮ. ಮಾ. : ನಾವು ವೈಯುಕ್ತಿಕವಲ್ಲದ, ಪ್ರಜಾಗತ ರಾಜ್ಯ ಪರಂಪರೆ ಹೊಂದಿರುವ ಕಾರಣ, ಪ್ರಜಾಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಜೆಗಳ ರಕ್ತಪಾತವಾಗದಂತೆ ನೋಡಿಕೊಳ್ಳಬೇಕು.

ದ್ವಿತೀಯ ಮ. ಮಾ. : ತಾವಿಬ್ಬರೂ ಸಂಯಮರ ದೃಷ್ಟಿಯುಳ್ಳವರು. ನೀವೂ ಸಹ ರಕ್ತಪಾತವನ್ನು ಇಷ್ಟಪಡುವುದಿಲ್ಲ.

ಪ್ರಥಮ ಮ. ಮಾ. : ಇಂಥಹ ಭೀಷಣ ಹಿಂಸಕ ಯುದ್ಧವನ್ನು ನಿಲ್ಲಿಸಿ. ಪ್ರಜಾರಕ್ಷಣೆಯನ್ನು ಮಾಡಿ, ಅವರಿಗೆ ಅಭಯದಾನವನ್ನು ನೀಡಬೇಕು. ರಾಷ್ಟ್ರ ಸಂಪತ್ತನ್ನು ನಾಶ ಮಾಡುವ, ಪ್ರಜೆಗಳನ್ನು ಹಾಳು ಮಾಡುವ ಈ ಯುದ್ಧವನ್ನು ತಾವುಗಳು ಮಾಡಬಾರದು.

ಭರತ भरत : ಮತ್ತೇನು ಮಾಡುವುದು?

ಪ್ರಥಮ ಮ. ಮಾ. : ಸೇವಾಯುದ್ಧಕ್ಕೆ ಬದಲಾಗಿ ಪರಸ್ಪರ ದ್ವಂದ್ವ ಯುದ್ಧವನು ಮಾಡಿ ಶಕ್ತಿ ಪರೀಕ್ಷೆಯನ್ನು ಮಾಡಕೊಳ್ಳಬಹುದು.

ಭರತ : ನನ್ನಸಮ್ಮತಿಯಿದೆ.

ಮಹಾ ಪ್ರಾಯ : ಧನ್ಯರಾದೆವು! ಧನ್ಯರಾದೆವು! ಮಹಾರಾಜರಿಗೆ ಜಯವಾಗಲಿ.

ಬಾಹುಬಲಿ : ನನ್ನದೂ ಸಂತೋಷದ ಸಮ್ಮತಿಯಿದೆ.

ಮಹಾಮಾತ್ಯ : ಧನ್ಯರಾದೆವು. ತಾವು ಅಹಿಂಸೆ ಮತ್ತು ಕರುಣೆಯ ಮಹಾಬಲಿ ತಮ್ಮ ಅಹಿಂಸೆ ಮತ್ತು ಕರುಣೆಯ ಭಾವಗಳು ಸರ್ವೋತ್ಕೃಷ್ಟವಾದದ್ದು.

ಪ್ರಥಮ.ಅ. : ಸರಿ. ಈ ಅಹಿಂಸಕ ದ್ವಂದ್ವ ಯುದ್ಧಗಳು ಮೂರು ಪ್ರಕಾರಗಳಲ್ಲಿವೆ. ಮೊದಲನೆಯದು ದೃಷ್ಟಿಯುದ್ಧ, ಎರಡನೆಯದು ಜಲಯುದ್ಧ ಮತ್ತು ಮೂರನೆಯದು ಮಲ್ಲಯುದ್ಧ (ಕರತಾಡನ ಮತ್ತು ಧನ್ಯದ ಘೋಷಣೆ).

ಪ್ರ. ಅ. : (ಯುದ್ಧ ಅಹಿಂಸಕ ಯುದ್ಧ ಶುರುವಾಯಿತು) ಎರಡೂ ದಿಗ್ಗಜ ಬಲಶಾಲಿ ಬಂಧುಗಳ ಸಂಘರ್ಷ ದೃಷ್ಟಿ ಯುದ್ಧದಿಂದ ಪ್ರಾರಂಭವಾಯಿತು.

ಸೂತ್ರಧಾರ : ಈ ಸ್ಪರ್ಧೆಯಲ್ಲಿ(ಪ್ರತಿಪಕ್ಷಗಳು) ಪರಸ್ಪರ, ರೆಪ್ಪೆ ಹೊಡೆಯದೆ ಒಬ್ಬರನ್ನೊಬ್ಬರು ನೋಡತೊಡಗಿದರು. ಯಾರು ಮೊದಲು ಕಣ್ಣನ್ನು ಮಿಟುಕಿಸುವರೋ ಅವರು ಪರಾಜಿತರಾಗುವರು.

ಸೂತ್ರಧಾರಿಣಿ : ವಿಶಾಲವಾಗಿ ತೆರೆದ ಕಣ್ಣುಗಳಿಂದ, ಅನುಜ ಬಾಹುಬಲಿ, ಅಗ್ರಜ ಭರತರ ತೇಜಸ್ವಿ ನೇತ್ರಗಳನ್ನು ನೋಡತೊಡಗಿದರು.

ಅದೇ ಕಣ್ಣುಗಳು ! ಬಾಲ್ಯದ ಸ್ನೇಹಪೂರ್ಣ ಕಣ್ಣುಗಳು, ಇಲ್ಲಿ ಯುದ್ಧ ಹೇಗೆ ? ಇದು ಯುದ್ಧವಾಗದೆ ಮಧುರ ದೃಷ್ಟಿ ಮಿಲನವಾಗಿತ್ತು.(ವಿನಯಭಾವದಿಂದ ಬಾಹುಬಲಿ ತನ್ನೆರಡೂ ಕಣ್ಣುಗಳನ್ನೂ ಭರತರ ಚರಣಗಳಲ್ಲಿ ನಿಲ್ಲಿಸಿ, ಅಲ್ಲಿಂದ ಕಿಂಚಿತ್ತೂ ಸರಿಸಲಿಲ್ಲ.)

ಸೂತ್ರಧಾರ : (ಬಾಹುಬಲಿಯ ಕಣ್ಣುಗಳಲ್ಲಿ ಮೂಡುತ್ತಿದ್ದ ಅಂತರಂಗದ ಭಾವನೆಗಳಾದ ವಿನಯ, ಸ್ನೇಹ, ಸಮರ್ಪಣಾಭಾವವನ್ನು ಸೂಕ್ಷ್ಮಮತಿಯಾದ ಭರತರು ಅರಿತುಕೊಂಡರು. ಅವರು ಬಾಹುಬಲಿಯಲ್ಲಿ ತಲ್ಲಿನರಾದರು. ಅಷ್ಟೊಂದು ಮಗ್ನತೆ, ಮುಗ್ಧತೆ ಮತ್ತು ಮೋಹವನ್ನು ಹೇಳಲು ಸಾಧ್ಯವಿಲ್ಲ. ಬಾಲ್ಯದಿಂದಲೇ ಬಾಹುಬಲಿಯ ಮನ್ಮಥ ಸದೃಶ, ದೇಹದಿಂದ ಆಕರ್ಷಿತರಾಗಿದ್ದ ಭರತರು, ಭಾವ್ಯ ಪ್ರೇಮದಲ್ಲಿ ಮುಳುಗಿ ತಮ್ಮನ್ನನ್ನೇ ನೋಡುತ್ತಾ ಮನದಾಳದಲ್ಲಿ ಇಷ್ಟೊಂದು ಪ್ರೀತಿ ಪ್ರೇಮದ ತಮ್ಮನೊಂದಿಗೆ ಯುದ್ಧವೇಕೆಂದು ಯಾಚಿಸತೊಡಗಿದರು.)

ಸೂತ್ರಧಾರಿಣಿ : ಈ ರೀತಿ ಭಾವುಕತೆಯಲ್ಲಿ ಮುಳುಗಿ, (ಯೋಚಿಸುತ್ತಾ ನೋಡುತ್ತಾ ಅರಿವಿಲ್ಲದೆ, ಅನಾಯಸವಾಗಿ, ಆಕಸ್ಮಿಕವಾಗಿ) ಭರತರ ಸ್ನೇಹಸಿಕ್ತ ನಯನಗಳು ಮುಚ್ಚಿಕೊಂಡವು. ಕಣ್ಣುಗಳಿಗೆ ತಿಳಿಯದೇ ಇಲ್ಲಿ ಆದರೆ ಅವುಗಳಿಂದ ಎರಡು ಅಶ್ರು ಬಿಂದುಗಳು ಹೊರಹೊಮ್ಮಿದುವು.

ಸೂತ್ರಧಾರ : (ಅಚಾತುರ್ಯ ನಡೆದುಹೋಗಿತ್ತು) ನಿರ್ಣಾಯಕರು ಭರತರನ್ನು ಬೆಚ್ಚಿಸುವ ಘೋಷಣೆಯನ್ನು ಮಾಡಿದ್ದರು.

ಪ್ರಥಮ.ಅ. : ಭರತರು ಪರಾಜಿತರಾಗಿದ್ದರು. ಬಾಹುಬಲಿ ವಿಜೇತರಾಗಿದ್ದರು.

ಸೂತ್ರಧಾರ : ನಂತರ ಜಲಯುದ್ಧದ ಸಮಯವಾಗಿತ್ತು. ಅಣ್ಣತಮ್ಮಂದಿರು ಸರೋವರಕ್ಕೆ ಹಾರಿದ್ದರು. ಪರಸ್ಪರ ನೀರೆರಚತೊಡಗಿದರು. ನೀರಿನಲ್ಲಿ ಪರಸ್ಪರ ಪ್ರಹಾರ ನಡೆದಿತ್ತು. ಇದು ಆಟವಾಗಿತ್ತೇ ವಿನಹ ಯುದ್ಧವಾಗಿ ತೋರಿಬರಲಿಲ್ಲ. ಆಟದಲ್ಲಿ ಸುತ್ತು ಇದ್ದದ್ದೇ ! ಆದರೆ ಬಾಹುಬಲಿ ನೀರಿನ ಮಳೆಗರೆಯುತ್ತಿದ್ದರು. ಭರತರು ಸೋಸ್ತಾಗಿದ್ದರು. ಬಾಹುಬಲಿ ಮುಳುಗುತ್ತಾ

ಪ್ರೇಮದಿಂದ ಅಗ್ರಜರನ್ನು ನೋಡುತ್ತಿದ್ದರು. ಭರತರು ತಾವೇ ಸೋಲನ್ನು ಒಪ್ಪಿಕೊಂಡರು. (ಈರೀತಿ ಜಲಕೌಶಲ ಮತ್ತು ಜಲಯುದ್ಧಕೊನೆಗೊಂಡಿತು.)

ಸೂತ್ರಧಾರ : ಈಗ ಮಲ್ಲಯುದ್ಧ ಪ್ರಾರಂಭವಾಯಿತು. ಎರಡೂ ಬಾರಿಯ ಸೋಲಿನಿಂದ ಭರತರು ಚಿಂತಿತರಾಗಿದ್ದರು. ಸೋಲಿನ ಭಾವನೆ ಅವರನ್ನು ಆವರಿಸಿಕೊಂಡಿತ್ತು. ಓಹ್ ಇದೇ ರೀತಿಯಾದರೆ ಪೃಥ್ವಿಯ ಮೇಲಿನ ಸಾರ್ವಭೌಮತ್ವವೂ ಕಳೆದು ಹೋಗಬಹುದು. ರಾಜರುಗಳ ಮುಂದೆ ನಾನು ನಗೆಪಾಟಲಿಗೆ ಗುರಿಯಾಗುವೆನು. ಚಕ್ರವರ್ತಿ ಪದವಿ (ಹೋಗುವುದೆಂದೆನಿಸುತು ! ಆರು ಖಂಡ ಪೃಥ್ವಿಯ ಸಾಮ್ರಾಜ್ಯ ! ಕ್ಷಣಾರ್ಧದಲ್ಲಿ ಅನುಜನಮೇಲಿದ್ದ ಚಿರಸ್ನೇಹವನ್ನು (ಆಕ್ರೋಶವು ಆಕ್ರಮಿಸಿಬಿಟ್ಟವು. ಭರತರು ವಿವೇಕಶೂನ್ಯರಾದರು ಮತ್ತೆ ಮತ್ತೆ ಬಾಹುಬಲಿಯ ಮರ್ಮಾಂಗದ ಮೇಲೆ ಭಯಂಕರ ಮುಷ್ಠಿ ಪ್ರಹಾರ ಮಾಡಿದರು. ಇದೇನು ? ಬಂಡೆ ಸಮಾನರಾದ ಮಹಾವೀರ ಬಾಹುಬಲಿಯೂ ಸಹ ಸ್ವಲ್ಪ (ಸಮಯದವರೆಗೆ ಬುದ್ಧಿಶೂನ್ಯರಾದರು ಭೂಮಿಯಲ್ಲಿ ಅರ್ಧ ಕುಸಿದರು.

ಸೂತ್ರಧಾರ : ಜನತೆಯಲ್ಲಿ ಹಾಹಾಕಾರವೆದ್ದಿತು.

ಜನತೆ : ಇದು ಅನೈತಿಕ, ಇದು ಅನೈತಿಕ, ಮಲ್ಲಯುದ್ಧದ ನಿಯಮಕ್ಕೂ ವಿರುದ್ಧ !

ಸೂತ್ರಧಾರಿಣಿ : ಹಾಹಾಕಾರವನ್ನು ಕೇಳಿ ಭರತರು ಪರಿತಪ್ಪಿಸಿದರು.

ಭರತ : ಓಹ್ ನಾನೇನು ಮಾಡಿದೆ?

ಸೂತ್ರಧಾರ : ಆದರೆ ಮುಷ್ಠಿ ಪ್ರಹಾರದಿಂದ ಹುಚ್ಚರಾದ ಬಾಹುಬಲಿ ದಿಗ್ಗಜ ಭರತರನ್ನು ತನ್ನ ಬಾಹುಗಳಲ್ಲಿ ಎತ್ತಿಕೊಂಡರು. ಯುದ್ಧ ಕ್ಷೇತ್ರದ ಪೂರಾ ಗಿರಿಗಿರಿ ಸುತ್ತಿಸಿದರು. ಪುನ: ಜನತೆ ಮತ್ತು ಸೇನೆಯಲ್ಲಿ ಹಾಹಾಕಾರವೆದ್ದಿತು.

ಸೂತ್ರಧಾರ : ಭರತರನ್ನು ನೆಲಕ್ಕೆ ಅಪ್ಪಳಿಸುವರೇನು ? ಅಪ್ಪಳಿಸಿ ಕೊಲ್ಲುವರೇನು ? ಕೊಂದರೆ ಬಹಳ ಅನರ್ಥವೇ ಆದೀತು!!!

ಸೂತ್ರಧಾರಿಣಿ : ಆದರೆ ಆತ್ಮಬಲದ ವಿವೇಕ ಚೂಡಾಮಣಿ ಬಾಹುಬಲಿ ಅಂಥಹವರಲ್ಲ. ಮೊದಲು ನೆಲಕ್ಕೆ ಅಪ್ಪಳಿಸಲೇ ಎಂದು ಯೋಚಿಸಿದರು, ಆದರೆ ಈ ಧರಣಿ ಯಾರದ್ದು ಎನಿಸಿತು ? ಯಾರದ್ದೂ ಅಲ್ಲ. ವಿವೇಕ ಅವರ ಕೈಬಿಡಲಿಲ್ಲ. ಯಾವ ತರಹದ ಘಾಸಿಯನ್ನು ಮಾಡದೆ, ಆದರ ಸಮ್ಮಾನಗಳಿಂದ ಭರತರನ್ನು ಕೆಳಗಿಳಿಸಿದರು. ಆದರೆ ಭರತರು ರಾಜ್ಯವನ್ನು (ಕಳೆದುಕೊಳ್ಳುತ್ತಿದ್ದ ಕಾರಣ, ತಮ್ಮದೇ ಸೋಲಿನಿಂದ ಪುನಃ ಕುಪಿತರಾದರು. ಮೂರೂ ಯುದ್ಧದಲ್ಲಿ ಸೋಲನ್ನು ಅನುಭವಿಸಿ, ಅವರು ಸಾರ್ವಭೌಮತ್ವವನ್ನು ಕಳೆದುಕೊಂಡಿದ್ದರು. ಮನದ ಸಂತುಲನವನ್ನು ಕಳೆದುಕೊಂಡ ಭರತರು, ಭಯದಿಂದ ವಿಚಲಿತರಾಗಿ, ತಮ್ಮ ರತ್ನವನ್ನು ಸ್ಮರಿಸಿ, ಅನುಜ ಬಾಹುಬಲಿಯ ಮೇಲೆ ಪ್ರಯೋಗಿಸಿಯೇ ಬಿಟ್ಟರು. ನೋಡುತ್ತಿದ್ದವರೆಲ್ಲ ಜಯ ಜಯಕಾರ ಮಾಡಿದರು.)

ಪ್ರಥಮ ಮ. ಮಾ : ಅನರ್ಥವಾಯಿತು ? ಅನರ್ಥವಾಯಿತು ? ಅರರೆ ಭರತ ಮಹಾರಾಜರು ಚಕ್ರವನ್ನು ಪ್ರಯೋಗಿಸಿಬಿಟ್ಟರು, ಚಕ್ರವನ್ನು ಪ್ರಯೋಗಿಸಿಬಿಟ್ಟರು, ಇದು ಅನ್ಯಾಯ - ಇದು ಮಹಾ ಅನ್ಯಾಯ ಮಹಾರಾಜರೇ ಇದು ಯುದ್ಧ ನಿಯಮ ಮತ್ತು ಮರ್ಯಾದೆಗಳ ಉಲ್ಲಂಘನೆ?

ಸೂತ್ರಧಾರ : ಆದರೆ ಚಕ್ರ ನಿಂತ ಹೋಯಿತು. ಭರತರ ಈ ದ್ವೇಷೀ ಚೇತನದ ಚಕ್ರ, ಅನ್ಯರನ್ನು ಭಾತೃ ಸಮಾನವಾಗಿ ನೋಡಬೇಕೆಂದು ಹೇಳುವ ಪ್ರತೀಕ ಸಂಕೇತ. ಒಂದೇ ವಂಶದ ಜನರ ಮೇಲೆ ಅದು ಕಾರ್ಯಾನ್ವಿತವಾಗುವುದಿಲ್ಲ. ಆದ್ದರಿಂದ ಚಕ್ರ ಬಾಹುಬಲಿಯ ಶಿರಚ್ಛೇಧನ ಮಾಡದೆ. ಅವರ ಅಹಿಂಸೆ ಮತ್ತು ಆತ್ಮಬಲದ ಮುಂದೆ ಪರಾಜಿತವಾಗಿದೆ. ಅವರ ಸುತ್ತು

ಮೂರು ಪ್ರದಕ್ಷಿಣೆ ಹಾಕಿ, ತನ್ನಸ್ವಾಮಿ, ಮಹಾರಾಜ ಭರತರಲ್ಲಿಗೆ ಹಿಂದಿರುಗಿತು.

ಅಮಾತ್ಯರು ಮತ್ತು ಸಮೂಹ - ನೋಡಿ ನೋಡಿ ಚಮತ್ಕಾರವನ್ನು ಚಕ್ರವು ಸೋತು ಹೋಯಿತು ! ಚಕ್ರವು ಸೋತು ಹಿಂದಿರುಗಿತು. ಹಿಂಸೆಗೆ ಸೋಲು ಅಹಿಂಸೆಗೆ ಗೆಲುವು !! ಆತ್ಮಬಲಿ ಬಾಹುಬಲಿಗೆ ಜಯವಾಗಲಿ ! ಅಹಿಂಸೆಗೆ ಜಯವಾಗಲಿ.

ಭರತ : ಅರೆ ಇದೇನಾಯಿತು ! ನನ್ನ ದಾಸನೇ ನನ್ನ ಅನುಚರನೇ, ನನ್ನ ಆಜ್ಞಾಧಾರಿ ಚಕ್ರವೇ. ನನ್ನ ಪ್ರತಿಸ್ಪರ್ಧಿಯಲ್ಲಿಗೆ ಹೋಗಿ ಹಿಂದಿರುಗಿದ್ದೇಕೆ ?

ಸೂತ್ರಧಾರ : ಭರತರು ಪರಾಜಯದಿಂದ ತುಂಬಾ ದುಃಖಿತರಾದರು. ನಿರುಪಾಯವಾದ ಅವರ ಕ್ರೋಧ ತಣ್ಣಗಾಯಿತು. ಪ್ರತಿಹಿಂಸೆಯ ಭಾವ ಮಂದವಾಯಿತು. ಮನದಲ್ಲಿ ದಯೆ ಕರುಣೆಗಳು ಜಾಗ್ರತವಾಯಿತು. ಭರತರು ಬಾಹುಬಲಿಯಿಂದ ಕ್ಷಮೆಕೋರಿದರು.

ಸೂತ್ರಧಾರ : ಈಗ ಬಾಹುಬಲಿಗೆ, ಮುಷ್ಠಿಪ್ರಹಾರದಿಂದ, ಅಗ್ರಜ ಭರತರನ್ನು ಗೆಲ್ಲುವ ಕ್ಷಣ ಒದಗಿ ಬಂದಿತು. (ಕೇವಲ ಸೋಲಿಸುವುದೇ ಅಲ್ಲದೆ, ಅವರ ಜೀವನವನ್ನೇ ಉತ್ತುಂಗ ಶಿಖರಕ್ಕೇರಿಸುವ ಮಹಾ ಕ್ಷಣ, ಮಹಾ ಸುಯೋಗ ಸುಲಭವಾದ ಸದವಕಾಶ ಒದಗಿಬಂದಿತು.)

ಸೂತ್ರಧಾರಿಣಿ : ಅವರ ಬಲಿಷ್ಠವಾದ ಮುಷ್ಠಿ ಮೇಲೇಳುತ್ತಿದ್ದಂತೆಯೇ ಕ್ಷಣಾರ್ಧದಲ್ಲೇ ಕೆಳಗಿಳಿಯಿತು. ಅಹಂಕಾರ, ಸೇಡು ಮತ್ತು ವಿಜಯದ ಅಂಧತ್ವದ, ಬಹಿರ್ಜಗತ್ತಿನಿಂದ, ಅಂತರ್ ಯಾತ್ರೆ, ಅವರ ಅಂತರಂಗದ ಆಳದಲ್ಲಿ ಪ್ರಾರಂಭವಾಯಿತು. ಒಂದು ಕ್ಷಣ ಸುಮ್ಮನಾದರು ?

ತಮ್ಮ (ಪೂರ್ವದ ಅಹಿಂಸೆ, ಸ್ನೇಹ ಮತ್ತು ಭ್ರಾತೃ ಪ್ರೇಮದ ಸಂಸ್ಕಾರದಿಂದ, ಜಾಗ್ರತರಾಗಿ, ತಮ್ಮ ಅಹಂಕಾರ ಮತ್ತು ಕ್ರೋಧವನ್ನು ಅಂತರಂಗದಾಳದಲ್ಲಿ ಅರಿಯತೊಡಗಿದರು.)

ಬಾಹುಬಲಿ : ನನ್ನ ಅಹಂಕಾರ ~~ಮತ್ತು (ಮರ್ಯಾದೆ)~~ ಹೇಗೆ ಜಾಗೃತವಾಯಿತು ? ಈ ಅಹಿಂಸಕ ದ್ವಂದ್ವ ಯುದ್ಧವೂ, ಮಾನಾಭಿಮಾನಗಳಿಂದೊಡಗೂಡಿದೆ ! ಭರತರು ನೈತಿಕತೆಯನ್ನು ತೊರೆದು, ಚಕ್ರವನ್ನು ಪ್ರಯೋಗಿಸಿದರು. ಭ್ರಾತೃತ್ವವು ನಶಿಸಿ, ಅಹಿಂಸೆಯ ಯುದ್ಧದಲ್ಲಿ ಹಿಂಸೆಯು ರಾರಜಿಸಿತು. ಅಷ್ಟೊಂದು ವೀರರು, ಜ್ಞಾನಿಗಳೂ ಆದ ಅಗ್ರಜರೂ ಇಂಥಹ ಪ್ರಮಾದಗೈದರು. ಇದು ಕೇವಲ ರಾಜ್ಯದಾಸೆಯಿಂದಾಗಿ ! ನಾನೂ ಸಹ ! ಪೂಜ್ಯರೂ, ಪಿತೃಸಮಾನರೂ ಏದ ಅಗ್ರಜರ ಮೇಲೆ ಪ್ರಹಾರಗೈಯಲು ಸಿದ್ಧನಾಗಿದ್ದೆ ! ನನ್ನ ಬಾಹುಬಲ ಆತ್ಮಬಲಗಳಿಗೆ ಧಿಕ್ಕಾರ ! ನನ್ನ ಬಾಹು ಬಲದಿಂದ ಭರತರು ಪರಾಜಿತರಾಗಿದ್ದರೆ, ಇಕ್ಷ್ವಾಕು ವಂಶದ ಪ್ರತಿಷ್ಟೆ ಏನಾಗುತ್ತಿತ್ತು ? ಮತ್ತು ನನ್ನ ಋಷಭ ಪುತ್ರತ್ವ ಏನಾಗುತ್ತಿತ್ತು ? ಅದೇನೇ ಇರಲಿ ನಾನು ಯಾರು ? ವಾಸ್ತವದಲ್ಲಿ ನಾನು ಯಾರು ? ಈ ದೇಹ.... ಈ ಬಲ... ಈ ಶಕ್ತಿ........ ಇಲ್ಲ ಇಲ್ಲ ಅಗ್ರಜರ ಮೇಲೆ ನನ್ನ ಮುಷ್ಠಿ ಹರಿಹಾಯುವುದಿಲ್ಲ. ಸರ್ವಥಾ ಇಲ್ಲ!

ಸೂತ್ರಧಾರಿಣಿ (ಸೂತ್ರಧಾರ Changed) : (ಆಗ ಅವರು ಆಕ್ಷಣವನ್ನು ಜಯಿಸಿದ್ದರು. ಆ ಸಮಯದಲ್ಲಿ ವಿಜಯಿಯಾಗಿದ್ದರು. ಒದಗಿ ಬಂದ ಆ ಸಮಯದಲ್ಲಿ ಅವರು ಜಯಶೀಲರಾಗಿದ್ದರು. ಅವರು ತಮ್ಮ ಅಹಿಂಸಾಮಯ, ಆತ್ಮಸ್ವರೂಪವನ್ನು ಶುದ್ಧ ಬುದ್ಧ ಚೈತನ್ಯ ಧನವನ್ನು ಪ್ರಮಾದ ಮತ್ತು ನಿದ್ರೆಯಿಂದ ಎಚ್ಚರಗೊಳಿಸಿದರು.)

ಸೂತ್ರಧಾರ : ತಾವೇ ವಿಜಯೀಶಾಲಿಗಳಾಗಿದ್ದರೂ, ವಿಜೇತರ ಗುಣಗಾನವನ್ನು ಮಾಡುತ್ತ ಅನುಜ ಬಾಹುಬಲಿ, ಅಗ್ರಜ ಭರತರಿಗೆ, ವಿಜಯವನ್ನೊಪ್ಪಿಸಿದರು.

ಸೂತ್ರಧಾರಿಣಿ : ಆದರೆ ಎತ್ತಿದ ಕೈ ಹೇಗೆ ಇಳಿದೀತು ? ಆದರೆ ಎತ್ತಿದ ಕೈ, ಶತೃವಿನ ತಲೆಯನ್ನು ಸ್ಪರ್ಶಿಸದೆ, ತನ್ನ ತಲೆಯ ಮೇಲೆಯೇ

ಪ್ರಯೋಗಿಸಲ್ಪಟ್ಟಿತು.

ಸೂತ್ರಧಾರ : ಬಾಹ್ಯ ಜಗತ್ತಿನ ಅನಾರತೆ ಮತ್ತು ಅನಿತ್ಯತೆಗಳು ದೃಷ್ಟಿಗೋಚರವಾದುವು.

ಸಂಸಾರದಿದಂ ಹೊರಗೆ, ಶರೀರದಿಂದ ಹೊರಗೆ, ಮನದಿಂದ ಆಚೆ, ಅವರ ದೃಷ್ಟಿಯು, ಅಂತಃಸೃಷ್ಟಿಯ ಆಳದಲ್ಲಿ ಲೀನವಾಯಿತು. ಅಲ್ಲಿ ಕೇವಲ ಆತ್ಮಭಾವ, ಶುದ್ಧಾತ್ಮಭಾವ, ತಮ್ಮದೇ, ಆತ್ಮ ಪ್ರದೇಶದಲ್ಲಿ ಗಂಭೀರ ವಾಣಿಯು ಕೇಳಿಸತೊಡಗಿತು.

ಬಾಹುಬಲಿ : ನಾನು ದೇಹವಲ್ಲ ಆತ್ಮ. ನಾನು ಆತ್ಮಬಲಿ, ದೇಹಬಲಿ ಬಾಹುಬಲಿಯಲ್ಲ. ನಾನು ಶುದ್ಧ ಬುದ್ಧ ಚೈತನ್ಯ ಸ್ವಯಂ ಜ್ಯೋತಿ ಸುಖಧಾಮ ಚೈತನ್ಯ ಘನ, ಸ್ವಯಂ ಜ್ಯೋತಿ ಸುಖಧಾಮ!

ಸೂತ್ರಧಾರಿಣಿ : ಆ ಸುವರ್ಣ ಸಮಯದಲ್ಲಿ ಆತ್ಮದ ಸಾರವನ್ನಂತು, ಆತ್ಮಬಲಿ, ಬಾಹುಬಲಿ, ದೊಡ್ಡ ಚಮತ್ಕಾರವನ್ನೇ ಮಾಡಿದರು. ಅಭೂತಪೂರ್ವ ಇತಿಹಾಸವನ್ನೇ ಸೃಷ್ಟಿಸಿದರು.

ಸೂತ್ರಧಾರ : ಭರತರ ಮೇಲೆ ಪ್ರಹಾರ ಮಾಡಲು ಎತ್ತಿದ ಹಸ್ತದಿಂದಲೇ ತಮ್ಮ ರಾಜಮುಕುಟವನ್ನು ತೆಗೆದರು ಮತ್ತು ತಲೆಯ ಕೇಶವನ್ನು ಕಿತ್ತುಕೊಂಡರು.

ಸೂತ್ರಧಾರಿಣಿ : ಕೇಶಲುಂಚನ - ಅಹಂ ಉನ್ಮೂಲ - ಮಾನ ವಿಸರ್ಜನೆ. ಸ್ವಯಂ ಜಾಗೃತಿಯ ಚಿಹ್ನೆ ಸರ್ವಸಂಗಪರಿತ್ಯಾಗದ ಪ್ರತೀಕ ಕೌಶವನ್ನು ಕಿತ್ತು ಕೀಳುತ್ತಾ, ಅಗ್ರಜ ಭರತರೆಡೆಗೆ ಕ್ಷಮಾಪ್ರಾರ್ಥನೆಗೆ ಮುನ್ನಡೆದರು.

ಬಾಹುಬಲಿ : ಪಿತೃ ಸಮಾನರಾದ ಪೂಜ್ಯ ಅಗ್ರಜರೇ ದಿಗ್ವಿಜಯದ ತಮ್ಮ ಯಾತ್ರೆ ಸಫಲವಾಗಲಿ. ಶುಭವಾಗಲಿ ನಿಮ್ಮ ಮೇಲಿನ ವಿಜಯ ನನಗೆ ಬೇಕಿಲ್ಲ [illegible] ನನ್ನ ವಿಜಯಯಾತ್ರೆ ಪ್ರಾರಂಭವಾಗಿದೆ. ಅಂತರ್‌ಲೋಕದ ಆತ್ಮಸೃಷ್ಟಿಯ ಕಡೆಗೆ! ಅನಂತ, ಅಕ್ಷುಣ್ಣ, ಅಖಂಡ ಚಿರಂತನ, ಚಿರಸ್ಥಾಯಿಯಾದ ಆತ್ಮಸೃಷ್ಟಿಯೆಡೆಗೆ, ಅಲ್ಲಿ ಪರಾಜಯವಿಲ್ಲ. ಅಲ್ಲಿ ಸದಾ ವಿಜಯವೇ ವಿಜಯ. ನನ್ನ ಅಪರಾಧವನ್ನು ಕ್ಷಮಿಸಿ. ನನಗೆ ಆಶೀರ್ವಾದ ಮಾಡಿ.

ಭರತ : (ನಿನ್ನ ಯುದ್ಧ ನೀತಿ ಭ್ರಷ್ಟ, ಪರಾಜಿತ ಸಹೋದರನಿಂದ ಕ್ಷಮೆಯನ್ನು ಬೇಡುವೆಯಾ ? ಅನಂತ ತಪ್ಪುಗಳ ತಪ್ಪಿತಸ್ಥ ಮತ್ತು ಕ್ಷಮಾಭಾಜನ ನಾನು!)

ಮಹಾಮಾತ್ಯ, ಸೈನ್ಯ ಮತ್ತು ತಕ್ಷಶಿಲೆಯ ಸಮೂಹ ಮಹಾರಾಜ ಬಾಹುಬಲಿ. ತಾವು ಹೀಗೆ ಮಾಡಬೇಡಿ! ತಕ್ಷಶಿಲೆಯ ವೈಭವವನ್ನು ಹೆಚ್ಚಿಸಿರಿ.

ಬಾಹುಬಲಿ : ತಕ್ಷಶಿಲೆಯ ಪ್ರಜೆ ನನ್ನನ್ನು ಕ್ಷಮಿಸಬೇಕು. ನನ್ನ ಬಾಹುಬಲಿ ಯಾವುದೇ ವಿಜಯ, ಯಾವುದೇ ಸಂಹಾರ ಮತ್ತು ಯಾವುದೇ ವಿನಾಶಕ್ಕಾಗಿ ಅಲ್ಲ. ಅದು ಅಹಿಂಸೆ ಮತ್ತು ಆತ್ಮಬಲದಿಂದೊಡಗೂಡಿದ ವಿಶ್ವಶಾಂತಿಯ ನಿರ್ಮಾಣಕ್ಕಾಗಿ! ಹಹಿಂಸೆ ಮತ್ತು ಅಧಿಕಾರಲಾಲಸೆಯ ವಿಧ್ವಂಸದಲ್ಲಿ ........ ನಾನು............ ಈ ಲೌಕಿಕದೆಡೆಯಿಂದ ಅಲೌಕಿಕದೆಡೆಗೆ ಹೋಗುತ್ತಿರುವೆನು. ಈ ದೇಹದಿಂದ ಆತ್ಮದೆಡೆಗೆ ಸಾಗುತ್ತಿರುವೆನು.

ಭರತ : ಅಂದರೆ?

ಬಾಹುಬಲಿ : ನನಗೆ ಅಪ್ಪಣೆ ಕೊಡಿ. ಬಂಧುವೇ ನನಗೆ ಆಶೀರ್ವಾದ ಮಾಡಿ. ನಾನು ಪರಿಗ್ರಹವನ್ನು ತ್ಯಜಿಸಿ ಸರ್ವಸಂಗ ಪರಿತ್ಯಾಗದೆಡೆಗೆ ಸಾಗುತ್ತಿರುವೆನು. ಬಾಹ್ಯಜಗತ್ತನ್ನು ತೊರೆದು, ಅಂತರಂಗಜಗತ್ತಿಗೆ ಹೋಗುತ್ತಿರುವೆನು.